

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | 160 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅ. ದೇವೇಗೌಡ |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 21-09-2020 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಸ್ಥಾಪನೆಗಾಗಿ ಹತ್ತು ವರ್ಷಗಳು ಕಳೆದಿದ್ದರೂ ಈ ವಿಶ್ವವಿದ್ಯಾಲಯಕ್ಕೆ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕಿನ ತಿಪ್ಪಸಂದ್ರ ಹೋಬಳಿಯಲ್ಲಿ ಸರ್ಕಾರದಿಂದ 100 ಎಕರೆ ಜಮೀನು ಎಂಟು ವರ್ಷಗಳ ಹಿಂದೆಯೇ ಮಂಜೂರಾಗಿದ್ದು, ಸಂಸ್ಕೃತ ವಿಶ್ವವಿದ್ಯಾಲಯದ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ ಈವರೆವಿಗೂ ಯಾವುದೇ ಕ್ರಮ ಕೈಗೊಂಡಿರುವುದಿಲ್ಲವೇಕೆ; | ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ದಿನಾಂಕ: 03-05-2010ರಿಂದ ಜಾರಿಗೆ ಬರುವಂತೆ ಸ್ಥಾಪಿಸಲಾಗಿದೆ.<br><br>ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯಕ್ಕೆ ರಾಮನಗರ ಜಿಲ್ಲೆಯ, ಮಾಗಡಿ ತಾಲ್ಲೂಕಿನ ತಿಪ್ಪಸಂದ್ರ ಹೋಬಳಿ, ತಿಪ್ಪಸಂದ್ರ ಗ್ರಾಮದ ಸರ್ವೆ ನಂ. 40ರಲ್ಲಿ 100 ಎಕರೆ ಜಮೀನನ್ನು ಸರ್ಕಾರಿ ಆದೇಶ ಸಂ. ಆರ್‌ಡಿ 112 ಎಲ್‌ಜಿಬಿ 2012, ದಿನಾಂಕ: 30-03-2013 ರಲ್ಲಿ ಮಂಜೂರು ಮಾಡಲಾಗಿರುತ್ತದೆ.<br><br>ಸದರಿ ಜಮೀನು 2013ನೇ ಸಾಲಿನಲ್ಲಿ ಮಂಜೂರಾಗಿದ್ದರೂ ಸಹ ಸದರಿ ಜಮೀನಿನ ನಕ್ಷೆಯು ದಿನಾಂಕ: 11-08-2015 ರಂದು ಅನುಮೋದನೆ ಗೊಂಡು ಅಧಿಕೃತವಾಗಿ ವಿಶ್ವವಿದ್ಯಾನಿಲಯಕ್ಕೆ ಹಸ್ತಾಂತರಗೊಂಡಿರುತ್ತದೆ.<br><br>ಆಡಳಿತ ಭವನ, ಶೈಕ್ಷಣಿಕ ಭವನಗಳು ಮತ್ತು ವಿದ್ಯಾರ್ಥಿನಿಲಯಗಳನ್ನು ಅಂದಾಜು ರೂ. 30.00ಕೋಟಿಗಳ ವೆಚ್ಚದಲ್ಲಿ ನಿರ್ಮಿಸಲು ನೀಲ ನಕ್ಷೆ ಸಿದ್ಧಪಡಿಸಿಕೊಡಲು ವಿಶ್ವವಿದ್ಯಾನಿಲಯವು ದಿನಾಂಕ: 22-12-2016 ರಂದು ಮುಖ್ಯ ವಾಸ್ತುಶಿಲ್ಪಿಗಳು, ಲೋಕೋಪಯೋಗಿ ಇಲಾಖೆ ಇವರನ್ನು ಕೋರಿರುತ್ತದೆ. ತದನಂತರ ವಿವಿಧ ಕಾರಣಗಳಿಂದಾಗಿ ಕಟ್ಟಡ ನಿರ್ಮಾಣದ ಯೋಜನೆಗಳು ಹಾಗೂ ಯೋಜನಾ ವೆಚ್ಚ ಗಳನ್ನು ಪರಿಷ್ಕರಿಸುತ್ತಾ, ಸರ್ಕಾರದ ಅನುದಾನ ಕೋರುತ್ತಾ ಬರಲಾಗಿದೆ.<br><br>ಪ್ರಸ್ತುತ, ಸದರಿ ಜಾಗದಲ್ಲಿ ವಿಶ್ವವಿದ್ಯಾನಿಲಯದ ವಿವಿಧ ಕಟ್ಟಡ ನಿರ್ಮಾಣಕ್ಕಾಗಿ ರೂ. 369.00ಕೋಟಿಗಳ ಅಂದಾಜಿನಲ್ಲಿ ನಕ್ಷೆ ಹಾಗೂ ಇತರೆ ಸವಿವರಗಳ ಅಂದಾಜು ಪಟ್ಟಿಯನ್ನೊಳಗೊಂಡ ಪ್ರಸ್ತಾವನೆಯನ್ನು ದಿನಾಂಕ:02-12-2019ರಲ್ಲಿ ವಿಶ್ವವಿದ್ಯಾನಿಲಯವು ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಸಲ್ಲಿಸಿರುತ್ತದೆ.<br>ಆದರೆ, ಕೋವಿಡ್-19 ಸಾಂಕ್ರಾಮಿಕ ರೋಗವು ರಾಜ್ಯದೆಲ್ಲೆಡೆ ವ್ಯಾಪಿಸುತ್ತಿರುವ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯು ವಿಧಿಸಿದ ನಿರ್ಬಂಧಗಳಿಂದಾಗಿ ಕಟ್ಟಡ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |

...2

| | | |
|---|---|---|
| (ಆ) | ಇದರಿಂದಾಗಿ ಶೈಕ್ಷಣಿಕ ಚಟುವಟಿಕೆಗಳು ಕುಂಠಿತವಾಗಿರುವುದಿಲ್ಲವೆ; ಸದರಿ ಸಂಸ್ಕೃತ ವಿಶ್ವವಿದ್ಯಾಲಯದ ಕಟ್ಟಡ ನಿರ್ಮಾಣಕ್ಕೆ ಸರ್ಕಾರವು ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಿ ಕಟ್ಟಡ ನಿರ್ಮಿಸಲು ಮುಂದಾಗುವುದೇ? | ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯವು ಶ್ರೀ ಜಯಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದ ಆವರಣದಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿದ್ದು, ಪಾಠ-ಪ್ರವಚನಗಳಿಗೆ ಅವಶ್ಯಕವಾದ ಜಾಗ ಲಭ್ಯವಿರುತ್ತದೆ. ಶೈಕ್ಷಣಿಕ ಚಟುವಟಿಕೆಗಳಿಗೆ ಯಾವುದೇ ಅಡೆತಡೆಗಳಾಗಿರುವುದಿಲ್ಲ.<br>ಹಂತಹಂತವಾಗಿ ಆರ್ಥಿಕ ಇಲಾಖೆಯು ವಿಧಿಸಿದ ನಿರ್ಬಂಧಗಳು ಸಡಿಲಗೊಂಡು ಅನುದಾನ ಬಿಡುಗಡೆ ಆದ ಕೂಡಲೇ ಕಟ್ಟಡ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗುವುದು. |

ಸಂಖ್ಯೆ: ಇಡಿ 265 ಯುಎನ್ಇ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)